KA / BG-GPO/2515/WPP-47/2009-2011



# ಕರ್ನಾಟಕ ರಾಜ್ಯಪತ್ರ

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಏಪ್ರಿಲ್ ೩೦, ೨೦೦೯ (ವೈಶಾಖ ೧೦, ಶಕ ವರ್ಷ ೧೯೩೧) | ಸಂಚಿಕೆ ೧೮ |
| --- | --- | --- |

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/399/ಡಿಟಿಸಿಆರ್/2007–08, ದಿನಾಂಕ:15ನೇ ಜುಲೈ, 2008**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಅಬಕಾರಿ ನಿರೀಕ್ಷಕರು (ಪ್ರಭಾರ) ಮಂಗಳೂರು ಪೂರ್ವ ವಲಯ, ಮಂಗಳೂರು.

**ಆರೋಪಿಗಳು:**

ಆರೋಪಿ ಪತ್ತೆಯಾಗಿರುವುದಿಲ್ಲ.

**ವಾಹನದ ಮಾಲೀಕರು**

ಶ್ರೀ ವಿನ್ನಿ ಜೋಕಿಂ ಮಥಾಯಿಸ್ ಬಿನ್ ಜೋಕಿಂ ಮಥಾಯಿಸ್, 1–248 ಬಸ್ಸು ನಿಲ್ದಾಣದ ಬಳಿ, ನೀರುಮಾರ್ಗ, ಪೆದಮಲೆ ಪೋಸ್ಟ್, ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ನಿರೀಕ್ಷಕರು (ಪ್ರಭಾರ) ಮಂಗಳೂರು ಪೂರ್ವ ವಲಯ, ಮಂಗಳೂರುರವರು ತಮ್ಮ ಸಿಬ್ಬಂದಿಯವರೊಂದಿಗೆ ದಿನಾಂಕ:15.05.2008ರಂದು ವಿಧಾನಸಭೆ ಚುನಾವಣೆ ಪ್ರಯುಕ್ತ ಜಿಲ್ಲಾ ದಂಡಾಧಿಕಾರಿಗಳು ಮದ್ಯಮಾರಾಟ ನಿಷೇಧಿಸಿ ಆದೇಶ ನೀಡಿದ ಪ್ರಯುಕ್ತ ಅಬಕಾರಿ ಉಪ ಆಯುಕ್ತರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನೇತೃತ್ವದಲ್ಲಿ ರಸ್ತೆ ಗಸ್ತು ತಿರುಗುತ್ತಿದ್ದಾಗ ಮಂಗಳೂರು ತಾಲ್ಲೂಕಿನ ನೀರುಮಾರ್ಗ ಜಂಕ್ಷನ್‌ನ ಬಳಿ ಅಕ್ರಮವಾಗಿ ಮದ್ಯಮಾರಾಟ ಮಾಡುತ್ತಿದ್ದಾರೆ ಎಂದು ದೊರೆತ ಖಚಿತ ವರ್ತಮಾನದ ಮೇರೆಗೆ ಸದರಿ ಸ್ಥಳಕ್ಕೆ ದಾಳಿ ವೆಸಗಿದಾಗ ಒಬ್ಬ ವ್ಯಕ್ತಿ ತನ್ನ ವಾಹನದ ಹೆಡ್ ಲೈಟ್‌ನ ಬೆಳಕಿನಲ್ಲಿ ನಿಂತಿದ್ದು, ತಮ್ಮನ್ನು ಗಮನಿಸಿ ಬೈಕ್ ನಿಲ್ಲಿಸಿದ ಜಾಗದ ಎಡಭಾಗದ ಕಾಡಿಗೆ ಜಿಗಿದು ಪರಾರಿಯಾದನು. ಆತನನ್ನು ಹಿಡಿಯಲು ಪ್ರಯತ್ನಿಸಿದ್ದರೂ, ಕತ್ತಲಿನಲ್ಲಿ ಕಣ್ಮರೆಯಾಗಿರುತ್ತಾನೆ. ಅನುಮಾನಗೊಂಡು ಸದರಿ ಮೋಟಾರು ಬೈಕಿನ ಬಳಿಗೆ ಬಂದು ನೋಡಿದಾಗ ಒಂದು ದೊಡ್ಡ ಪ್ಲಾಸ್ಟಿಕ್ ಕೈಚೀಲದ ಒಳಗೆ ಮದ್ಯದ ಸೀಸೆಗಳು ಕಂಡುಬಂತು. ಚೀಲವನ್ನು ಸದರಿ ಬೈಕಿನ ಹಿಂಬದಿಯ ಸೀಟಿಗೆ ಹಗ್ಗದಿಂದ ಕಟ್ಟಲಾಗಿತ್ತು. ಚುನಾವಣೆ ಪ್ರಯುಕ್ತ ಮದ್ಯ ಮಾರಾಟ ನಿಷೇಧವಿದ್ದ ಕಾರಣ ಅಕ್ರಮವಾಗಿ ಮದ್ಯ ಮಾರಾಟ ಮಾಡಿರುವುದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 14, 15ರ ಅಪರಾಧವಾಗಿದ್ದು, ಕಲಂ 32, 38ಎ ಮತ್ತು 43ಎ ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ ಸದರಿ ಚೀಲವನ್ನು ಪರಿಶೀಲಿಸುವ ಸಲುವಾಗಿ ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಲು ಕಾಲಾವಕಾಶವಿಲ್ಲದ ಕಾರಣ ಸ್ಥಳದಲ್ಲಿ ಸರ್ಚ್ ಮೆಮೊವನ್ನು ತಯಾರಿಸಿ ಅಬಕಾರಿ ಅಧಿಕಾರಿ ಹಾಗೂ ಸಿಬ್ಬಂದಿಯವರನ್ನು ಪಂಚರನ್ನಾಗಿ ಇರಿಸಿಕೊಂಡು ಅವರ

ಸಮಕ್ಷಮ ಕೈಚೀಲವನ್ನು ಬಿಚ್ಚಿ ನೋಡಿದಾಗ ಆಫೀಸರ್ಸ್ ಚಾಯ್ಸ್ ಎಂದು ಲೇಬಲ್ ಅಂಟಿಸಿರುವ 180 ಎಂಎಲ್‌ನ 10 ಸೀಸೆಗಳು ಮತ್ತು ಕ್ಲಬ್ ಚಾಯ್ಸ್ ಫೈನ್ ವಿಸ್ಕಿ ಎಂದು ಲೇಬಲ್ ಅಂಟಿಸಿರುವ 180 ಎಂಎಲ್‌ನ28 ಸೀಸೆಗಳು ಒಟ್ಟು 11–340 ಲೀ. ಮದ್ಯ ಮತ್ತು ನೌಕ್‌ಔಟ್ ಸ್ಟ್ರಾಂಗ್ ಬಿಯರ್ 650 ಎಂಎಲ್‌ನ 6 ಮತ್ತು 330 ಎಂಎಲ್‌ನ 8 ಬಾಟಲುಗಳಲ್ಲಿ ಒಟ್ಟು 6–540 ಲೀ ಬಿಯರ್ ಇರುವುದು ಕಂಡುಬಂತು. ನಂತರ ಸದರಿ ಮೋಟಾರು ಬೈಕನ್ನು ಪರಿಶೀಲಿಸಿದಾಗ ಅದು ಬಜಾಜ್ ಕಂಪೆನಿ ನಿರ್ಮಿತ ಕೆಂಪು ಬಣ್ಣದ ಮೋಟಾರು ಬೈಕ್ ಆಗಿದ್ದು, ಇದರ ನೋಂದಣಿ ಸಂಖ್ಯೆ: ಕೆಎ–19–ಆರ್–3433 ಆಗಿರುತ್ತದೆ. ಸದರಿ ಬೈಕಿನಿಂದ ಓಡಿಹೋದ ವ್ಯಕ್ತಿಯ ಬಗ್ಗೆ ಆಸುಪಾಸಿನಲ್ಲಿ ವಿಚಾರಿಸಿದಾಗ ಆತನು ಯಾರೆಂದು ತಿಳಿಯಲಿಲ್ಲ. ಸದರಿ ಸೊತ್ತುಗಳನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು ಆರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ: 4/2008–09 ದಿನಾಂಕ:15.05.2008ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ ಮುಂದಿನ ತನಿಖೆಯನ್ನು ಕೈಗೊಂಡಿರುತ್ತಾರೆ.

ಮೊಕದ್ದಮೆಯ ತನಿಖೆಯನ್ನು ಕೈಗೊಂಡ ಅಬಕಾರಿ ನಿರೀಕ್ಷಕರು (ಪ್ರಭಾರ) ಮಂಗಳೂರು ಪೂರ್ವ ವಲಯ–I, ಮಂಗಳೂರುರವರ ತನಿಖಾ ವರದಿ ಸಂಖ್ಯೆ: ಎಂಇಆರ್:1: ಆರ್‌ಸಿಆರ್:4:2008–09 ದಿನಾಂಕ:17.06.2008ರ ತನಿಖಾ ವರದಿಯಲ್ಲಿ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯ ಹಾಗೂ ಬಿಯರ್‌ನಿಂದ ತೆಗೆದ ಸ್ಯಾಂಪಲ್‌ಗಳನ್ನು ಮುಖ್ಯ ರಾಸಾಯನಿಕ ತಜ್ಞರು, ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಬೆಂಗಳೂರು ಇವರಿಗೆ ಅಬಕಾರಿ ರಕ್ಷಕರ ಮೂಲಕ ಸಲ್ಲಿಸಿದ್ದು, ಮುಖ್ಯ ರಾಸಾಯನಿಕ ತಜ್ಞರು, ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಬೆಂಗಳೂರುರವರ ಪತ್ರ ಸಂಖ್ಯೆ:2329/2008 ದಿನಾಂಕ:09.06.2008ರ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ 24.9 ಡಿಗ್ರಿ ಯು.ಪಿ. ಮತ್ತು 25.2 ಡಿಗ್ರಿ ಯು.ಪಿ. ಮತ್ತು ಬಿಯರಿನ ಮದ್ಯಸಾರ ಪ್ರಮಾಣ 7.74% ವಿ.ವಿ. ಮತ್ತು 7.66% ವಿ.ವಿ. ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ತನಿಖಾಧಿಕಾರಿಯವರು ಜಪ್ತು ಪಡಿಸಿಕೊಂಡ ಮದ್ಯ ಮತ್ತು ಬಿಯರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ/399/ಡಿಟಿಸಿಆರ್/2007–08 ದಿನಾಂಕ:14.07.2008ರಲ್ಲಿ ಮೊಕದ್ದಮೆಯಲ್ಲಿ ಜಪ್ತು ಪಡಿಸಿಕೊಂಡಿರುವ ಮದ್ಯ ಹಾಗೂ ಬಿಯರನ್ನು (ಮಾದರಿಗಳನ್ನು ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ ಮದ್ಯ ಹಾಗೂ ಬಿಯರನ್ನು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಎಫ್‌ಡಿ:06: ಪಿಐಎಸ್:2007 ದಿನಾಂಕ:13.07.2007ರಂತೆ ಮಾರಾಟ ಮಾಡಲು ಅವಕಾಶವಿಲ್ಲದೇ ಇರುವುದರಿಂದ ಕಲಂ 43ಎ 3ರನ್ವಯ ಅಬಕಾರಿ ಉಪ ಅಧೀಕ್ಷಕರು, ಮಂಗಳೂರು ಉಪ ವಿಭಾಗ, ಮಂಗಳೂರು ಇವರ ಸಮಕ್ಷಮ ಸೂಕ್ತ ಮಹಜರು ಜರುಗಿಸಿ ನಾಶಪಡಿಸಲು ಆದೇಶಿಸಿದೆ.

ಅಬಕಾರಿ ನಿರೀಕ್ಷಕರು, ಮಂಗಳೂರು ಪೂರ್ವ ವಲಯ– I ಇವರು ದಿನಾಂಕ:17.06.2008 ರಂದು ವಾಹನದ ನೊಂದಣಿ ಮಾಲೀಕರ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್‌ನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸಹಾಯಕ ಸಾರಿಗೆ ಅಧಿಕಾರಿಗಳು, ಮಂಗಳೂರುರವರು ಸಲ್ಲಿಸಿದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್‌ನಲ್ಲಿ ವಶಪಡಿಸಿಕೊಂಡ ಬಜಾಜ್ ಮೋಟಾರು ಬೈಕ್ ನೊಂದಾಣಿ ಸಂಖ್ಯೆ: ಕೆಎ–19–ಆರ್–3433 ಇದರ ಆರ್.ಸಿ. ಮಾಲೀಕರು ಶ್ರೀ ವಿನ್ನಿ ಜೋಕಿಂ ಮಥಾಯಿಸ್ ಬಿನ್ ಜೋಕಿಂ ಮಥಾಯಿಸ್, 1–248 ಬಸ್ಸು ನಿಲ್ದಾಣದ ಬಳಿ, ನೀರುಮಾರ್ಗ, ಪೆದಮಲೆ ಪೋಸ್ಟ್, ಮಂಗಳೂರು ಎಂದು ದೃಢೀಕರಿಸಿರುತ್ತಾರೆ.

ಸಹಾಯಕ ಸಾರಿಗೆ ಅಧಿಕಾರಿಗಳು ನೀಡಿರುವ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಾಹನ ನೋಂದಣಿ ಮಾಲೀಕರಾದ ಶ್ರೀ ವಿನ್ನಿ ಜೋಕಿಂ ಮಥಾಯಿಸ್ ಬಿನ್ ಜೋಕಿಂ ಮಥಾಯಿಸ್, 1–248 ಬಸ್ಸು ನಿಲ್ದಾಣದ ಬಳಿ, ನೀರುಮಾರ್ಗ, ಪೆದಮಲೆ ಪೋಸ್ಟ್, ಮಂಗಳೂರುರವರಿಗೆ ಈ ಪ್ರಾಧಿಕಾರದಿಂದ ದಿನಾಂಕ:21.06.2008ರಂದು ನೋಟಿಸು ನೀಡಲಾಗಿದ್ದು, ಸದರಿ ನೋಟಿಸಿನಲ್ಲಿ ಅಕ್ರಮವಾಗಿ ಮದ್ಯ/ ಬಿಯರ್ ಹೊಂದಿ ಸಾಗಾಟ ಮಾಡಿದ ಅಪರಾಧಕ್ಕಾಗಿ ವಾಹನ ನೊಂದಣಿ ಸಂಖ್ಯೆ: ಕೆಎ–19–ಆರ್–3433 ಬಜಾಜ್ ಮೋಟಾರ್ ಬೈಕು ಇದನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಎ ರಂತೆ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದಾಗಿ ಈ ಕಾರಣ ಕೇಳಿ ನೋಟಿಸು ನೀಡಲಾಗಿ ವಾಹನದ ಮಾಲೀಕರಾದ ನೀವು ಈ ನೋಟಿಸು ತಲುಪಿದ 7 ದಿವಸದೊಳಗೆ ನಿಮ್ಮ ಹೇಳಿಕೆಗಳನ್ನು ಖುದ್ದಾಗಿ ಅಥವಾ ವಕೀಲರ ಮೂಲಕ ಸಲ್ಲಿಸಲು ಸೂಚಿಸಿದೆ. ತಪ್ಪಿದಲ್ಲಿ ನಿಮ್ಮ ಹೇಳಿಕೆ ಏನೂ ಇರುವುದಿಲ್ಲವೆಂದು ಪರಿಗಣಿಸಿ ಕಾನೂನು ರೀತ್ಯಾ ಮುಂದಿನ ಕ್ರಮ ಜರುಗಿಸಲಾಗುವುದೆಂದು ನೋಟಿಸಿನಲ್ಲಿ ನಮೂದಿಸಿ ನೋಂದಾಣಿ ಅಂಚೆಯ ಮೂಲಕ ಕಳುಹಿಸಲಾಗಿರುತ್ತದೆ.

ವಾಹನದ ನೋಂದಾಯಿತ ಮಾಲಿಕರಿಗೆ ನೀಡಿರುವ ಕಾರಣ ಕೇಳುವ ನೋಟಿಸು ಅವರಿಗೆ ಜಾರಿಯಾಗದೇ, ಸದರಿ ವ್ಯಕ್ತಿ ಲಭ್ಯವಿರುವುದಿಲ್ಲವೆಂಬ ಅಂಚೆ ಇಲಾಖೆ ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಹಿಂದೆ ಬಂದಿರುತ್ತದೆ. ಹಾಗೂ ಇಂದಿನವರೆಗೆ ಯಾರೊಬ್ಬರೂ ವಾಹನ ತಮ್ಮದೆಂದು ಅಧಿಕೃತ ದಾಖಲಾತಿಗಳೊಂದಿಗೆ ವಾಹನ ಬಿಡುಗಡೆಗಾಗಿ ಈ ಪ್ರಾಧಿಕಾರದ ಮುಂದೆ ಯಾರೂ ಖುದ್ದಾಗಿ ಅಥವಾ ವಕೀಲರ ಮೂಲಕ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಫ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು

ಬದ್ಧವಾಗಿದೆಯೆಂದು ಸಾಕ್ಷಧಾರಗಳೊಂದಿಗೆ ಸಾಭೀತು ಪಡಿಸದೇ ಇದ್ದಲ್ಲಿ ಸದರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ಸಿ ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:15.05.2008ರಂದು ಬಜಾಜ್ ಮೋಟಾರು ಬೈಕ್ ನೋಂದಾಣಿ ಸಂಖ್ಯೆ: ಕೆಎ–19–ಆರ್–3433ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ 11.340 ಲೀ. ಮದ್ಯ ಮತ್ತು 6.540 ಲೀ ಬಿಯರನ್ನು ವಿಧಾನ ಸಭೆ ಚುನಾವಣೆ ಪ್ರಯುಕ್ತ ಜಿಲ್ಲಾ ದಂಡಾಧಿಕಾರಿಗಳು ಮದ್ಯ ಮಾರಾಟ ನಿಷೇಧಿಸಿರುವ ಸಂದರ್ಭದಲ್ಲಿ ಅಕ್ರಮವಾಗಿ ಅಧಿಕೃತ ರಹದಾರಿ ಪತ್ರವಿಲ್ಲದೇ ಮಾರಾಟ ಮತ್ತು ಸಾಗಾಣಿಕೆ ಮಾಡುತ್ತಿರುವುದನ್ನು ಅಬಕಾರಿ ನಿರೀಕ್ಷಕರು ಮಂಗಳೂರು ಪೂರ್ವ ವಲಯರವರು ಪತ್ತೆಹಚ್ಚಿ ಅಕ್ರಮ ಮದ್ಯ/ ಬಿಯರ್ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನಾ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಮದ್ಯ/ ಬಿಯರ್ ಆಗಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಭೀತಾಗಿರುವುದಾಗಿ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಅಬಕಾರಿ ನಿರೀಕ್ಷಕರು ಮಂಗಳೂರು ಪೂರ್ವ ವಲಯ ಇವರು ವಶಪಡಿಸಿಕೊಂಡ ಬಜಾಜ್ ಮೋಟಾರು ಬೈಕ್ ನೋಂದಣಿ ಸಂಖ್ಯೆ: ಕೆಎ–19–ಆರ್–3433 ನ್ನು ವಶಪಡಿಸಿಕೊಂಡು ಸುಮಾರು 4 ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ಯಾವುದೇ ವ್ಯಕ್ತಿಯು ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಹಾಗೂ ಸಹಾಯಕ ಸಾರಿಗೆ ಅಧಿಕಾರಿಗಳು ನೀಡಿರುವ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್‌ನ ಪ್ರಕಾರ ವಾಹನ ಮಾಲೀಕರ ವಿಳಾಸಕ್ಕೆ ನೋಂದಾಣಿ ಅಂಚೆಯ ಮೂಲಕ ನೀಡಿರುವ ಕಾರಣ ಕೇಳಿ ನೋಟಿಸು ಸ್ವೀಕೃತಿಯಾಗದೇ ಹಿಂದೆ ಬಂದಿರುವ ಹಿನ್ನಲೆಯಲ್ಲಿ ವಾಹನ ಮಾಲೀಕರ ತಿಳುವಳಿಕೆಯಿಂದಲೇ ಹಾಗೂ ಅವರು ಈ ಕೃತ್ಯಕ್ಕೆ ಶಾಮೀಲಾಗಿ ಈ ಕೃತ್ಯ ಎಸಗಿರುವುದು ಸ್ಪಷ್ಟವಾಗಿ ಕಾಣಬರುತ್ತದೆ. ಹಾಗೂ ಆರೋಪಿಗಳು ತಲೆಮರೆಸಿಕೊಂಡಿದ್ದು, ಆರೋಪಿಗಳನ್ನು ಪತ್ತೆಹಚ್ಚಲು ಅಸಾಧ್ಯವಾಗಿರುವುದರಿಂದ ಮತ್ತು ಸದರಿ ವಾಹನವನ್ನು ತೆರೆದಿಟ್ಟ ಬಯಲಿನಲ್ಲಿ ನಿಲ್ಲಿಸಿರುವುದರಿಂದ ಮಳೆ, ಬಿಸಿಲು, ಗಾಳಿಗೆ ಸಿಲುಕಿ ತುಕ್ಕು ಹಿಡಿದು ಹಾಳಾಗಿ ಹೋಗುವ ಸಾಧ್ಯತೆಯಿರುವುದರಿಂದ, ಇನ್ನು ಹೆಚ್ಚು ಕಾಲ ಇರಿಸಿಕೊಂಡರೆ ಇನ್ನಷ್ಟು ಶಿಥಿಲಗೊಂಡು ಮೌಲ್ಯಹೀನವಾಗುವ ಸಾಧ್ಯತೆಯಿದ್ದು ಸರ್ಕಾರಕ್ಕೆ ಬರುವ ಆದಾಯ ಕೂಡಾ ಕಡಿಮೆಯಾಗುವ ಸಂಭವವಿರುವುದರಿಂದ ಅಕ್ರಮ ಅಬಕಾರಿ ಸೊತ್ತು ಸಾಗಾಣಿಕೆಗೆ ಬಳಸಿದ ಬಜಾಜ್ ಮೋಟಾರು ಬೈಕ್ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂಬ ಹಿನ್ನಲೆಯಲ್ಲಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಮಂಗಳೂರು ಪೂರ್ವ ವಲಯ– I, ಮಂಗಳೂರು ಇವರು ತಕ್ಷೀರು ಸಂಖ್ಯೆ: 4/08–09, ದಿನಾಂಕ:15.05.2008ರಲ್ಲಿ ಜಪ್ತು ಪಡಿಸಿರುವ ಬಜಾಜ್ ಮೋಟಾರು ಬೈಕ್ ನೋಂದಾಣಿ ಸಂಖ್ಯೆ: ಕೆಎ–19–ಆರ್–3433 (ಚಾಸೀಸ್ ನಂ. FDCBKA43399 ಮತ್ತು ಇಂಜಿನ್ ನಂ. FDEBKA43473)ನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:15.07.2008 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್,**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.928

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/122/ಡಿಟಿಸಿಆರ್/2005–06, ದಿನಾಂಕ:15ನೇ ಜುಲೈ, 2008**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿಗಳು:** |
|---|---|
| ಪೊಲೀಸ್ ಉಪ ನಿರೀಕ್ಷಕರು ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣೆ, ಮಂಗಳೂರು. | ಆರೋಪಿ ಪತ್ತೆಯಾಗಿರುವುದಿಲ್ಲ. |

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣೆ ಮತ್ತು ತಮ್ಮ ಸಿಬ್ಬಂದಿಯವರೊಂದಿಗೆ ದಿನಾಂಕ:10.08.2005 ರಂದು ಕೇರಳದ ಕಡೆಗೆ ಟ್ಯಾಂಕರ್‌ನಲ್ಲಿ ಯಾವುದೇ ಪರವಾನಿಗೆ ಇಲ್ಲದೇ ಅಕ್ರಮವಾಗಿ ಸ್ಪಿರಿಟ್ ಸಾಗಾಟದ ಬಗ್ಗೆ ಬಂದ ಖಚಿತ ವರ್ತಮಾನದ ಮೇರೆಗೆ ಮಂಗಳೂರು ನಗರದ ಕಂಕನಾಡಿ ಗ್ರಾಮದ ಪಂಪುವೆಲ್ ಎಂಬಲ್ಲಿ ರಸ್ತೆಗಾವಲು ನಡೆಸುತ್ತಿದ್ದಾಗ ಮಂಗಳೂರು ನಂತೂರು ಕಡೆಯಿಂದ ಕೇರಳ ಕಡೆಗೆ ಹೋಗುತ್ತಿದ್ದ ಟ್ಯಾಂಕರನ್ನು ಸಂಶಯದ ಮೇರೆಗೆ ನಿಲ್ಲಿಸಲು ಸೂಚನೆ ನೀಡಿದಾಗ ಸದರಿ ಟ್ಯಾಂಕರಿನ ಚಾಲಕನು ಸುಮಾರು 50 ಮೀಟರು ಮುಂದಕ್ಕೆ ನಿಲ್ಲಿಸಿ ಟ್ಯಾಂಕರನ್ನು ಸ್ಥಳದಲ್ಲಿಯೇ ಬಿಟ್ಟು ಪರಾರಿಯಾಗಿರುತ್ತಾನೆ. ಸದರಿ ಟ್ಯಾಂಕರನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಅದರಲ್ಲಿ ಯಾವುದೇ ಅಧಿಕೃತ ರಹದಾರಿ ಪತ್ರಗಳು ಇಲ್ಲದೇ ಇರುವುದರಿಂದ ಸದರಿ ಟ್ಯಾಂಕರಿನಲ್ಲಿದ್ದ 1500 ಲೀಟರ್ ಸ್ಪಿರಿಟನ್ನು ವಶಕ್ಕೆ ತೆಗೆದುಕೊಂಡು, ಅಕ್ರಮ ಸಾಗಾಣಿಕೆಗೆ ಬಳಸಿದ ಟ್ಯಾಂಕರ್ ಸಂಖ್ಯೆ: ಟಿಎನ್-49-ಎಂ-6597 ನ್ನು ಜಪ್ತು ಮಾಡಿ ಆರೋಪಿ ಚಾಲಕನು ಯಾವುದೇ ಪರವಾನಿಗೆ ಇಲ್ಲದೇ ಕೇರಳ ಕಡೆಗೆ ಅಕ್ರಮವಾಗಿ ಸ್ಪಿರಿಟ್ ಸಾಗಾಟ ಮಾಡುತ್ತಿದ್ದುದ್ದರಿಂದ, ಕರ್ನಾಟಕ ಅಬಕಾರಿ ಕಾಯಿದೆ ಕಲಂ 11, 14 ಮತ್ತು 32, 34, 38ಎ ರ ಪ್ರಕಾರ ಅಪರಾಧವೆಸಗಿರುವುದರಿಂದ ಆರೋಪಿಯ ವಿರುದ್ಧ ತಕ್ಷೀರು ಸಂಖ್ಯೆ: 217/2005, ದಿನಾಂಕ:10.08.2005 ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ ಜಫ್ತಾದ ಸೊತ್ತುಗಳನ್ನು ಅಬಕಾರಿ ಉಪ ನಿರೀಕ್ಷಕರು (1), ಜಾರಿ ಮತ್ತು ತನಿಖೆ, ಮಂಗಳೂರು ದಕ್ಷಿಣ ಇವರಿಗೆ ಪ್ರಾಧಿಕಾರದ ಅನುಮತಿಯ ಮೇರೆಗೆ ಹಸ್ತಾಂತರಿಸಿರುತ್ತಾರೆ.

ಮೊಕದ್ದಮೆಯ ತನಿಖಾಧಿಕಾರಿಗಳು ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯಸಾರದಿಂದ ತೆಗೆದ ಮಾದರಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಸದರಿ ಮಾದರಿಗಳನ್ನು ವಿಶ್ಲೇಷಿಸಿದ ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರುರವರು ದಿನಾಂಕ:26.09.2005ರಂದು ನೀಡಿದ ರಾಸಾಯನಿಕ ಪರೀಕ್ಷಾ ಫಲಿತಾಂಶದ ವರದಿಯಲ್ಲಿ ಮದ್ಯಸಾರದ ಪ್ರಮಾಣ 34.0% ಇರುವುದಾಗಿ ಹಾಗೂ ಮಾದರಿಗಳಲ್ಲಿ ಸಸ್ಪೆಂಡಡ್ ಪದಾರ್ಥಗಳು ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ತನಿಖಾಧಿಕಾರಿಯವರು ಜಪ್ತು ಪಡಿಸಿಕೊಂಡ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ದಿನಾಂಕ:26.11.2005ರಂದು ನೀಡಿದ ವರದಿಯನ್ನು ಆಧರಿಸಿ, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಇಐಬಿ/ಡಿಟಿಸಿಆರ್/122/2005-06 ದಿನಾಂಕ:28.12.2005ರಲ್ಲಿ ಜಪ್ತುಪಡಿಸಿಕೊಂಡಿರುವ 1500 ಲೀ. ಮದ್ಯಸಾರವನ್ನು (ಮಾದರಿಗಳನ್ನು ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲಾಗಿದೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಟ್ಯಾಂಕರ್ ಸಂಖ್ಯೆ: ಟಿಎನ್-49-ಎಂ-6597ರ ಆರ್.ಸಿ. ಮಾಲೀಕರ ಹೆಸರು ಮತ್ತು ವಿಳಾಸವನ್ನು ನೀಡುವ ಬಗ್ಗೆ ಸಂಬಂಧಪಟ್ಟ ರಿಜಿನಲ್ ಟ್ರಾನ್ಸ್‌ಪೋರ್ಟ್ ಆಫೀಸರ್ ತಾಂಜಾವೂರ್ ಜಿಲ್ಲೆ, ತಮಿಳುನಾಡು ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:18.08.2006ರಂದು ಪತ್ರ ಬರೆಯಲಾಗಿದ್ದು, ಸದರಿ ಪತ್ರವು ದಿನಾಂಕ:21.08.2006ರಂದು ಜಾರಿಯಾದ ಬಗ್ಗೆ ಸ್ವೀಕೃತಿ ಪತ್ರ ಈ ಕಛೇರಿಗೆ ಬಂದಿರುತ್ತದೆ. ತದನಂತರದಲ್ಲಿ ಸಾರಿಗೆ ಅಧಿಕಾರಿಯವರಿಗೆ ದಿನಾಂಕ:04.01.2007, 18.09.2007 ಮತ್ತು 17.12.2007ರಂದು ನೆನಪೋಲೆ ಪತ್ರ ಬರೆಯಲಾಗಿದ್ದು, ಅವರು ದಿನಾಂಕ:09.04.2008ರ ಪತ್ರದಲ್ಲಿ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಲ್ಲಿಸಿರುತ್ತಾರೆ. ಅವರು ಸಲ್ಲಿಸಿದ ಬಿ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ವಾಹನ ಸಂಖ್ಯೆ: ಟಿಎನ್-49:ಎಂ-6597 ವಾಹನವು ಇಂಡಿಕಾ ಕಾರು ಆಗಿದ್ದು, ಇದರ ಚಾಸೀಸ್ ನಂ.600142DYZP49906 ಮತ್ತು ಇಂಜಿನ್ ನಂ. 4751DI0DUZP49834 ಎಂದು ದೃಢೀಕರಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು (1), ಜಾರಿ ಮತ್ತು ತನಿಖೆ ಮಂಗಳೂರು ದಕ್ಷಿಣ ಇವರ ಪತ್ರ ಸಂಖ್ಯೆ: ಎಂಎಸ್:ಇಐಬಿ:ಸಿಆರ್ಎಂ:20:2005-06 ದಿನಾಂಕ:28.02.2008ರ ತನಿಖಾ ವರದಿಯಲ್ಲಿ ಸದರಿ ಟ್ಯಾಂಕರ್‌ನ ಮಾಲೀಕತ್ವದ ಬಗ್ಗೆ ಹಲವಾರು ಸಾರಿ ಪ್ರಯತ್ನಿಸಿದ್ದರೂ ಫಲಕಾರಿಯಾಗಿರುವುದಿಲ್ಲ ಸದರಿ ಟ್ಯಾಂಕರಿಗೆ ಅಳವಡಿಸಿದ ನಂಬರ್ ಪ್ಲೇಟು ನಕಲಿ ಎಂದು ದೃಢಪಟ್ಟಿರುವುದರಿಂದ ಮತ್ತು ವಶಪಡಿಸಿಕೊಂಡ ವಾಹನವು ಸುಮಾರು 3 ವರ್ಷ ಕಳೆದಿದ್ದರೂ, ಸದರಿ ಟ್ಯಾಂಕರನ್ನು ತನ್ನದೆಂದು ಹೇಳಿ ಯಾರೂ ಮುಂದೆ ಬಂದಿರುವುದಿಲ್ಲ ಹಾಗೂ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಅಲ್ಲದೇ ಸದರಿ ಟ್ಯಾಂಕರ್ ಕಳವು ಇತ್ಯಾದಿ ಪ್ರಕರಣದ ಬಗ್ಗೆ ಯಾವುದೇ ದಿನಪತ್ರಿಕೆಯಲ್ಲಿ ವರದಿಗಳು ಬಂದಿರುವುದಿಲ್ಲ. ಆದುದರಿಂದ ಸದರಿ ಟ್ಯಾಂಕರನ್ನು ತೆರೆದ ಸ್ಥಳದಲ್ಲಿ ನಿಲ್ಲಿಸಿರುವುದರಿಂದ ಮಳೆ, ಬಿಸಿಲಿಗೆ ವಾಹನವು ಹಾಳಾಗಿ, ಮಾರುಕಟ್ಟೆಯ ಮೌಲ್ಯ ದಿನದಿನ ಕಳೆದು ಹೋಗುವ ಸಾಧ್ಯತೆವಿರುವುದರಿಂದ ಅಕ್ರಮ ಮದ್ಯಸಾರ ಸಾಗಾಣಿಕೆಗೆ ಬಳಸಿದ ಟ್ಯಾಂಕರನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಸಿ ರಂತೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಫ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು

ಬದ್ಧವಾಗಿದೆಯೆಂದು ಸಾಕ್ಷಧಾರಗಳೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:10.08.2005ರಂದು ಟ್ಯಾಂಕರ್ ಸಂಖ್ಯೆ: ಟಿಎನ್–49ಎಂ–6597 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ನಕಲಿ ನಂಬರ್ ಪ್ಲೇಟ್ ಅಳವಡಿಸಿ ಚಾಲಕನು 1500 ಲೀ. ಮದ್ಯಸಾರವನ್ನು ಹೊಂದಿ ಸಾಗಾಟ ಮಾಡುತ್ತಿದ್ದುದನ್ನು ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣೆ, ಮಂಗಳೂರುರವರು ಪತ್ತೆಹಚ್ಚಿ ಅಕ್ರಮ ಮದ್ಯಸಾರ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನಾ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಮದ್ಯಸಾರವಾಗಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣೆ, ಮಂಗಳೂರು ಇವರು ವಶಪಡಿಸಿಕೊಂಡ ಟ್ಯಾಂಕರ್ ನಕಲಿ ಸಂಖ್ಯೆ: ಟಿಎನ್–49–ಎಂ–6597ನ್ನು ವಶಪಡಿಸಿಕೊಂಡು ಸುಮಾರು 3 ವರ್ಷಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ಆದರೆ ಯಾವುದೇ ವ್ಯಕ್ತಿಯು ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ವಾಹನ ಚಾಲಕನು ಸದರಿ ವಾಹನಕ್ಕೆ ನಕಲಿ ನಂಬರ್ ಪ್ಲೇಟು ಅಳವಡಿಸಿ ಮದ್ಯಸಾರವನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಕಂಡುಬರುತ್ತದೆ. ಆದುದರಿಂದ ಸದರಿ ವಾಹನವನ್ನು ತೆರೆದಿಟ್ಟ ಬಯಲಿನಲ್ಲಿ ನಿಲ್ಲಿಸಿರುವುದರಿಂದ ಮಳೆ, ಬಿಸಿಲು, ಗಾಳಿಗೆ ಸಿಲುಕಿ ತುಕ್ಕು ಹಿಡಿದು ಹಾಳಾಗುವ ಸಂದರ್ಭವಿದ್ದು, ಇನ್ನು ಹೆಚ್ಚು ಕಾಲ ಇರಿಸಿಕೊಂಡರೆ ಇನ್ನಷ್ಟು ಶಿಥಿಲಗೊಂಡು ಮೌಲ್ಯಹೀನವಾಗುವ ಸಾಧ್ಯತೆಯಿದ್ದು ಸರ್ಕಾರಕ್ಕೆ ಬರುವ ಆದಾಯ ಕೂಡಾ ಕಡಿಮೆಯಾಗುವ ಸಂಭವವಿರುವುದರಿಂದ ಅಕ್ರಮ ಅಬಕಾರಿ ಸೊತ್ತು ಸಾಗಾಣಿಕೆಗೆ ಬಳಸಿದ ಟ್ಯಾಂಕರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂಬ ಹಿನ್ನಲೆಯಲ್ಲಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣಾ, ಮಂಗಳೂರು ಇವರ ಕ್ರೈಂ ನಂಬರ್:217/2005, ದಿನಾಂಕ:10.08.2005ರಲ್ಲಿ ಜಪ್ತು ಪಡಿಸಿರುವ ಟ್ಯಾಂಕರ್ ನಕಲಿ ಸಂಖ್ಯೆ: ಟಿಎನ್–49–ಎಂ–6597 ನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:15.07.2008 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್,**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.929

## ಜಂಟಿ ಆಯುಕ್ತರು (ಆಸ್ತಿಗಳು), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರವರ ಕಾರ್ಯಾಲಯ, ಕೇಂದ್ರ ಕಛೇರಿ, ನಗರಪಾಲಿಕೆ ಕಟ್ಟಡಗಳು, 1ನೇ ಮಹಡಿ, ನರಸಿಂಹರಾಜು ವೃತ್ತ, ಬೆಂಗಳೂರು

**ಭೂ ಅರ್ಜನೆ ಅಧಿನಿಯಮ 4(1)ನೇ ಪ್ರಕರಣದ ಮೇರೆಗೆ ಅಧಿಸೂಚನೆ**

**ಕ್ರಮಾಂಕ: ಎಲ್.ಎ.ಸಿ./ಸಿ.ಆರ್/18/2008–09, ದಿನಾಂಕ:1ನೇ ಏಪ್ರಿಲ್, 2009**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಆಸ್ತಿಗಳು, ಸಾರ್ವಜನಿಕ ಉದ್ದೇಶಗಳಿಗಾಗಿ ಅಂದರೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ಸಂಖ್ಯೆ:55 ರಲ್ಲಿ ಬರುವ ಪದ್ಮನಾಭನಗರದ ಕುಮಾರ ಸ್ವಾಮಿ ಲೇಔಟ್‌ನ 1ನೇ ಹಂತದ 14ನೇ ಮುಖ್ಯರಸ್ತೆಯಲ್ಲಿರುವ ನಿವೇಶನ ಸಂಖ್ಯೆ:37ರ ಪೈಕಿ 492.45 ಚ.ಅ. ಜಾಗವು ರಸ್ತೆ ಅಗಲೀಕರಣಕ್ಕೆ ಅಗತ್ಯವಾಗಿ ಬೇಕಾಗಿದೆ ಎಂದು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಕಂಡುಬಂದಿರುವುದರಿಂದ:

1976ರ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಕಾಯ್ದೆಯ ಕಲಂ 177 ಮತ್ತು ಕರ್ನಾಟಕ ಅಧಿನಿಯಮ ಸಂಖ್ಯೆ: 33ರ ಮೂಲಕ ತಿದ್ದುಪಡಿಯಾದ 1991ನೇ ಸಾಲಿನ ಭೂ ಸ್ವಾಧೀನ ಅಧಿನಿಯಮ 1894 (ಕೇಂದ್ರ ಅಧಿನಿಯಮ,

ಸಂಖ್ಯೆ:1894ರ 1) 4ನೇ ಪ್ರಕರಣದ–(1)ನೇ ಉಪ ಪ್ರಕರಣದ ಉಪಬಂಧಗಳ ಅನುಸಾರವಾಗಿ, ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಈ ಬಗ್ಗೆ ಈ ಮೂಲಕ ನೋಟೀಸನ್ನು ಕೊಡಲಾಗಿದೆ ಹಾಗೂ ಕರ್ನಾಟಕ ಸರ್ಕಾರವು ಆ ಅಧಿನಿಯಮದ 4(2)ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ಸಹಾಯಕ ಆಯುಕ್ತರು (ಆಸ್ತಿಗಳು), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು–ಭೂ ಅರ್ಜನೆ ಅಧಿಕಾರಿ, ಅವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡಲಾಗಿದೆ.

ಸದರಿ ಅಧಿನಿಯಮದ 3(ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರವು ಅಧಿನಿಯಮದ 5(ಎ) ಪ್ರಕರಣದ ಮೇರೆಗೆ ಜಂಟಿ ಆಯುಕ್ತರು (ಆಸ್ತಿಗಳು) ರವರ ಪ್ರಕಾರ್ಯಗಳನ್ನು ನಿರ್ವಹಿಸಲು ಸಹಾಯಕ ಆಯುಕ್ತರು (ಆಸ್ತಿಗಳು), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರನ್ನು ನೇಮಕ ಮಾಡಿದೆ.

ಭೂಮಿಯಲ್ಲಿ/ ಆಸ್ತಿಯಲ್ಲಿ ಹಿತಾಸಕ್ತಿ ಹೊಂದಿರುವ ಯಾವನೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ ಅವುಗಳನ್ನು ಅಧಿಸೂಚನೆಯು ಪ್ರಕಟವಾದ ತಾರೀಖಿನಿಂದ ಮೂವತ್ತು ದಿನಗಳ ಒಳಗಾಗಿ ಅಥವಾ ಅದಕ್ಕಿಂತ ಮುಂಚೆ ಕರ್ನಾಟಕ ಅಧಿನಿಯಮ 1961ರ 17ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894ರ 3(ಸಿ) ಪ್ರಕರಣದ ಮೇರೆಗೆ ಜಂಟಿ ಆಯುಕ್ತರು (ಆಸ್ತಿಗಳು) ರವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕವಾದ ಸಹಾಯಕ ಆಯುಕ್ತರು (ಆಸ್ತಿಗಳು), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು, ಇವರಿಗೆ ಲಿಖಿತ ಮೂಲಕ ಸಲ್ಲಿಸತಕ್ಕದ್ದು.

ಸದರಿ ಅರ್ಜನೆ ಉದ್ದೇಶಕ್ಕಾಗಿ ಸದರಿ ಭೂಮಿಗಳ/ ಆಸ್ತಿಗಳ ಮೇಲೆ ನಿಯೋಜಿತರಾದ ಯಾವುದೇ ಮೋಜಣಿದಾರರು ಅಥವಾ ಇತರೇ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಅಥವಾ ಅವರ ಕಾರ್ಯದಲ್ಲಿ ಹಸ್ತಕ್ಷೇಪ ಮಾಡಬಾರದೆಂದು ಸದರಿ ಭೂಮಿ/ ಆಸ್ತಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ಜಂಟಿ ಆಯುಕ್ತರು (ಆಸ್ತಿಗಳು), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರುರವರ ಅನುಮತಿಯಿಲ್ಲದೆ ಮಾರಾಟ, ಗುತ್ತಿಗೆ, ಅಡಮಾನ, ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಸದರಿ ಭೂಮಿಗಳ/ ಆಸ್ತಿಗಳ ವಿಲೇಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚ ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಅರ್ಜನೆ ಮಾಡಿಕೊಳ್ಳಲಾಗುವ ಸದರಿ ಭೂಮಿ/ಆಸ್ತಿಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯು ಸದರಿ ಅಧಿನಿಯಮದ (ಏಳನೇ ಖಂಡ) 2ನೇ ಪ್ರಕರಣದ ಮೇರೆಗೆ ಗಣನೆಗೆ ತೆಗೆದುಕೊಳ್ಳಬಾರದು.

ಸಹಾಯಕ ಆಯುಕ್ತರು (ಆಸ್ತಿಗಳು), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಕೇಂದ್ರ ಕಛೇರಿ, ನಗರಪಾಲಿಕೆ ಕಟ್ಟಡಗಳು, 2ನೇ ಮಹಡಿ, ನರಸಿಂಹರಾಜು ವೃತ್ತ, ಬೆಂಗಳೂರು ಇವರ ಕಛೇರಿಯಲ್ಲಿ ಭೂಮಿಗಳ/ ಆಸ್ತಿಗಳ ಸ್ಥೂಲ ನಕಾಶೆಯನ್ನು ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ಸಂಖ್ಯೆ:55ರಲ್ಲಿ ಬರುವ ಪದ್ಮನಾಭನಗರದ ಕುಮಾರಸ್ವಾಮಿ ಲೇಔಟ್‌ನ 1ನೇ ಹಂತದ 14ನೇ ಮುಖ್ಯರಸ್ತೆಯಲ್ಲಿರುವ ನಿವೇಶನ ಸಂಖ್ಯೆ: 37ರಲ್ಲಿನ ಭಾಗಶಃ ಜಾಗವನ್ನು ರಸ್ತೆ ಅಗಲೀಕರಣಕ್ಕೆ ಭೂಸ್ವಾಧೀನಪಡಿಸಿಕೊಳ್ಳಲು.

| ಕ್ರಮ ಸಂಖ್ಯೆ | ಖಾತೇದಾರರ ಹೆಸರು | ಅನುಭವದಾರರ ಹೆಸರು | ನಿವೇಶನ ಸಂಖ್ಯೆ | ಮಹಾನಗರ ಪಾಲಿಕೆ ಖಾತಾ ನೊಂದಾವಣೆ ಮುನಿಸಿಪಲ್ ಆಸ್ತಿ ಸಂಖ್ಯೆ | ಭೂಸ್ವಾಧೀನಕ್ಕೆ ಬೇಕಾಗಿರುವ ವಿಸ್ತೀರ್ಣ ಚ.ಅ.ಗಳಲ್ಲಿ | ತರಹೆ | ಚಕ್ಕುಬಂದಿ | | | |
|---|---|---|---|---|---|---|---|---|---|---|
| | | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1. | ಸಿ.ಜಿ. ಶ್ರೀನಿವಾಸ ಬಿನ್ ಸಿ.ಜಿ. ಶಾಸ್ತ್ರಿ, ನಂ.60, ಎಸ್.ಬಿ. ರಸ್ತೆ, ವಿ.ವಿ. ಪುರಂ, ಬೆಂಗಳೂರು. | ಸಿ.ಜಿ.ಶ್ರೀನಿವಾಸ ಬಿನ್ ಸಿ.ಜಿ. ಶಾಸ್ತ್ರಿ | 37 | ನಂ.36/37 | 492.45 ಚ.ಅ. | ನಿವೇಶನದ ಖಾಲಿ ಜಾಗ | 14ನೇ ಮುಖ್ಯ ರಸ್ತೆ | ನಿವೇಶನ ಸಂಖ್ಯೆ:37ರ ಉಳಿದ ಜಾಗ | ನಿವೇಶನ ಸಂಖ್ಯೆ:28 | 58ನೇ ಅಡ್ಡರಸ್ತೆ |

ಬೆಂಗಳೂರು
ದಿನಾಂಕ:01.04.2009
ಪಿ.ಡಿ.14

**ಈ. ರಾಧಾಕೃಷ್ಣ**
ಜಂಟಿ ಆಯುಕ್ತರು (ಆಸ್ತಿಗಳು)
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/148/ಡಿಟಿಸಿಆರ್/2006–07, ದಿನಾಂಕ:15ನೇ ಜುಲೈ, 2008**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿಗಳು:** |
|---|---|
| ಅಬಕಾರಿ ಉಪ ನಿರೀಕ್ಷಕರು (1) ಜ್ಯಾರಿ ಮತ್ತು ತನಿಖೆ ಮಂಗಳೂರು ಉತ್ತರ, ಮಂಗಳೂರು. | ದಿನಕರ ಪಾಟೀಲ ಬಿನ್ ಮಹಾಲಿಂಗ ಪಾಟೀಲ, 107 ಗಣಪತಿ ಗಲ್ಲಿ, ಆಶಾರಾಜ್ ಜ್ಯೂವೆಲರಿ ಹಿಂಬದಿ, ಬೆಳಗಾಂ ಜಿಲ್ಲೆ, (ವಾಹನದ ಚಾಲಕ) |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು (1), ಜಾರಿ ಮತ್ತು ತನಿಖೆ, ಮಂಗಳೂರು ಉತ್ತರ ರವರು ತಮ್ಮ ಸಿಬ್ಬಂದಿಯವರೊಂದಿಗೆ ದಿನಾಂಕ:10.11.2006ರಂದು ರಾತ್ರಿ 10.30 ಗಂಟೆ ಸಮಯದಲ್ಲಿ ಮಂಗಳೂರು ತಾಲ್ಲೂಕು ಕೂಳೂರು ಸೇತುವೆ ಬಳಿ ರಾ.ಹೆ. 17ರಲ್ಲಿ ರಸ್ತೆಗಾವಲು ನಡೆಸುತ್ತಿದ್ದ ಸಂದರ್ಭದಲ್ಲಿ ಪಣಂಬೂರು ಕಡೆಯಿಂದ ಕೊಟ್ಟಾರ ಚೌಕಿ ಕಡೆಗೆ ಬರುತ್ತಿದ್ದ ಕೆಂಪು ಬಣ್ಣದ ಲಾರಿ ನೋಂದಣಿ ಸಂಖ್ಯೆ:GA-02-V-6655ನ್ನು ತಪಾಸಣೆಗೆಂದು ನಿಲ್ಲಿಸಲು ಸೂಚನೆ ನೀಡಿದಾಗ ಸದರಿ ಲಾರಿ ಚಾಲಕನು ಲಾರಿಯನ್ನು ನಿಲ್ಲಿಸದೇ ವೇಗವಾಗಿ ಚಲಾಯಿಸಿಕೊಂಡು ಹೋದನು. ನಂತರ ಬೆನ್ನಟ್ಟಿ ತಪಾಸಣೆಗೆಂದು ಲಾರಿಯನ್ನು ಶೋಧಿಸಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಲು ಕಾಲಾವಕಾಶವಿಲ್ಲದ ಕಾರಣ ಸ್ಥಳದಲ್ಲಿ ಸರ್ಚ್ ಮೆಮೊವನ್ನು ತಯಾರಿಸಿ ಅಬಕಾರಿ ಅಧಿಕಾರಿಗಳು ಹಾಗೂ ಸಿಬ್ಬಂದಿಯವರ ಸಮಕ್ಷಮ ಸದರಿ ಲಾರಿಯನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೇ ಗೋವಾ ರಾಜ್ಯದಿಂದ ತಯಾರಾದ 250 ರಟ್ಟಿನ ಪೆಟ್ಟಿಗೆಗಳಲ್ಲಿ ಮದ್ಯವನ್ನು ಕೇರಳ ರಾಜ್ಯಕ್ಕೆ ಸಾಗಾಣಿಕೆ ಮಾಡಿರುವುದು ಕಂಡುಬಂತು. ಸದರಿ ಮದ್ಯವನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಗೋಲ್ಡನ್ ಎಸ್ ವಿಸ್ಕಿ ಎಂಬ ಲೇಬಲ್ ಅಂಟಿಸಿರುವ 750 ಎಂಎಲ್ ಒಟ್ಟು 2400 ಸೀಸೆಗಳಲ್ಲಿ =1800 ಲೀ. ನಕಲಿ ಮದ್ಯ ಹಾಗೂ ಗೋಲ್ಡನ್ ಎಸ್ ಡಿಲಕ್ಸ್ ಬ್ರಾಂಡಿ ಎಂಬ ಲೇಬಲ್ ಅಂಟಿಸಿರುವ 750 ಎಂಎಲ್ ಒಟ್ಟು 600 ಸೀಸೆಗಳಲ್ಲಿ = 450 ಲೀ ನಕಲಿ ಮದ್ಯ (ಒಟ್ಟು 2250 ಲೀಟರ್) ವನ್ನು ಪತ್ತೆಹಚ್ಚಿ ವಾಹನದಲ್ಲಿದ್ದ ಆರೋಪಿಯ ಹೆಸರು ಮತ್ತು ವಿಳಾಸವನ್ನು ವಿಚಾರಿಸಲಾಗಿ ದಿನಕರ ಪಾಟೀಲ ಬಿನ್ ಮಹಾಲಿಂಗ ಪಾಟೀಲ, 107 ಗಣಪತಿ ಗಲ್ಲಿ, ಆಶಾರಾಜ್ ಜ್ಯೂವೆಲ್ಲರಿ ಹಿಂಬದಿ, ಬೆಳಗಾಂ ಜಿಲ್ಲೆ ಎಂದು ತಿಳಿಸಿರುತ್ತಾನೆ. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 11, 13, 14ರ ಪ್ರಕಾರ ಅಪರಾಧವಾಗಿದ್ದು ಮತ್ತು ಕಲಂ 32, 34 ಮತ್ತು 38ಎ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ ಆರೋಪಿಯನ್ನು ಸ್ಥಳದಲ್ಲಿ ದಸ್ತಗಿರಿ ಮಾಡಿ, ಪಂಚರ ಸಮಕ್ಷಮ ಸಾಗಾಣಿಕೆಗೆ ಬಳಸಿದ ಲಾರಿ ಹಾಗೂ ನಕಲಿ ಮದ್ಯವನ್ನು ಜಪ್ತು ಮಾಡಿ ಮಹಜರು ತಯಾರಿಸಿ ಆರೋಪಿಯ ವಿರುದ್ಧ ತಕ್ಷೀರು ಸಂಖ್ಯೆ: 13/2006–07, ದಿನಾಂಕ:10.11.2006ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯನ್ನು ಹಾಗೂ ಆರೋಪಿಯನ್ನು ಘನ ನ್ಯಾಯಾಲಯಕ್ಕೆ ಒಪ್ಪಿಸಿ ಮುಂದಿನ ತನಿಖೆಯನ್ನು ಕೈಗೊಂಡಿರುತ್ತಾರೆ.

ಮೊಕದ್ದಮೆಯ ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು (1) ಜಾರಿ ಮತ್ತು ತನಿಖೆ ಮಂಗಳೂರು ಉತ್ತರ, ಮಂಗಳೂರು ಇವರು ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ನಕಲಿ ಮದ್ಯದಿಂದ ರಾಸಾಯನಿಕ ವಿಶ್ಲೇಷಣೆಗೆ ಮಾದರಿ ಸೀಸೆಗಳನ್ನು ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಿಗೆ ದಿನಾಂಕ:16.11.2006ರಂದು ಅಬಕಾರಿ ರಕ್ಷಕರ ಮೂಲಕ ಸಲ್ಲಿಸಿದ್ದು, ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರುರವರ ಪತ್ರ ಸಂಖ್ಯೆ: E-411–12 ದಿನಾಂಕ:24.11.2006ರ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ 40%, 42.6% ಮತ್ತು 43% ವಿ.ವಿ. ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ತನಿಖಾಧಿಕಾರಿಯವರು ಜಪ್ತು ಪಡಿಸಿಕೊಂಡ ನಕಲಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ದಿನಾಂಕ:28.02.2007ರಂದು ನೀಡಿದ ತನಿಖಾ ವರದಿಯನ್ನು ಆಧರಿಸಿ, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಇಐಬಿ/ ಡಿಟಿಸಿಆರ್/148/2006–07 ದಿನಾಂಕ:02.03.2007ರಲ್ಲಿ ಜಪ್ತು ಪಡಿಸಿಕೊಂಡಿರುವ 2,250 ಲೀ. ನಕಲಿ ಮದ್ಯವನ್ನು (ಮಾದರಿಗಳನ್ನು ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಬಕಾರಿ ಉಪ ಅಧೀಕ್ಷಕರು, ಮಂಗಳೂರು ಉಪವಿಭಾಗ ಇವರ ಸಮಕ್ಷಮ ದಿನಾಂಕ:24.03.2007ರಂದು ಮಹಜರು ಜರುಗಿಸಿ ನಾಶಪಡಿಸಿರುತ್ತಾರೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಲಾರಿ ಸಂಖ್ಯೆ: GA-02-V-6655 ರ ಆರ್.ಸಿ. ಮಾಲೀಕರ ಹೆಸರು ಮತ್ತು ವಿಳಾಸವನ್ನು ನೀಡುವ ಬಗ್ಗೆ ಸಂಬಂಧಪಟ್ಟ ಅಸಿಸ್ಟೆಂಟ್ ಡೈರೆಕ್ಟರ್ ಆಫ್ ಟ್ರಾನ್ಸ್‌ಪೋರ್ಟ್ ವಾಸ್ಕೋ, ಗೋವಾ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:02.08.2007ರಂದು ಪತ್ರ ಬರೆಯಲಾಗಿದ್ದು, ಸದರಿಯವರು ದಿನಾಂಕ:24.08.2007ರ ಪತ್ರದಲ್ಲಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಲಾರಿ ಸಂಖ್ಯೆ: GA-02-V-6655ರ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಈ ಪ್ರಾಧಿಕಾರಕ್ಕೆ

ಸಲ್ಲಿಸಿರುತ್ತಾರೆ. ಅಸಿಸ್ಟೆಂಟ್ ಡೈರೆಕ್ಟರ್ ಆಫ್ ಟ್ರಾನ್ಸ್‌ಪೋರ್ಟ್ ವಾಸ್ಕೋ, ಗೋವಾ ಇವರು ಸಲ್ಲಿಸಿದ ಬಿ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ವಾಹನದ ನೋಂದಾಣಿ ಮಾಲೀಕ ಶ್ರೀರಾಮ್ ಬಿ. ಗೂರ್ಖಾ ಎಂಬುದಾಗಿ ಹಾಗೂ ಶ್ರೀರಾಮ್ ಟ್ರಾನ್ಸ್‌ಪೋರ್ಟ್ ಫೈನಾನ್ಸ್ ಲಿಮಿಟೆಡ್, ಗೋವಾ ಎಂದು ಹಾಗೂ ಇದರ ಚಾಸೀಸ್ ನಂ. VSH042633 ಮತ್ತು ಇಂಜಿನ್ ನಂ. VSH 105105 ಎಂದು ದೃಢೀಕರಿಸಿರುತ್ತಾರೆ.

ಸದರಿ ಮೊಕದ್ದಮೆಯಲ್ಲಿ ದಸ್ತಗಿರಿಯಾದ ಆರೋಪಿಗೆ ಮತ್ತು ನೋಂದಾಣಿ ಮಾಲೀಕರಾದ ಶ್ರೀರಾಮ್ ಬಿ. ಗೂರ್ಖಾ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:17.09.2007ರಂದು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಬಿ ಪ್ರಕಾರ ಕಾರಣ ಕೇಳಿ ನೋಟಿಸುಗಳನ್ನು ನೋಂದಣಿ ಅಂಚೆ ಮೂಲಕ ರವಾನಿಸಿದ್ದು, ಸದರಿ ಕಾರಣ ಕೇಳಿ ನೋಟಿಸ್‌ನಲ್ಲಿ ಲಾರಿಯನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಎ ರಂತೆ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕೆ ಈ ನೋಟೀಸು ತಲುಪಿದ 15 ದಿವಸದೊಳಗಾಗಿ ನಿಮ್ಮ ಹೇಳಿಕೆಗಳನ್ನು ಖುದ್ದಾಗಿ ಅಥವಾ ವಕೀಲರ ಮೂಲಕ ಸಲ್ಲಿಸಲು ಸೂಚಿಸಲಾಗಿತ್ತು. ಮತ್ತು ತಪ್ಪಿದ್ದಲ್ಲಿ ನಿಮ್ಮ ಹೇಳಿಕೆ ಏನೂ ಇರುವುದಿಲ್ಲವೆಂದು ಪರಿಗಣಿಸಿ ಕಾನೂನು ರೀತ್ಯಾ ಮುಂದಿನ ಕ್ರಮ ಜರುಗಿಸಲಾಗುವುದೆಂದು ನೋಟಿಸಿನಲ್ಲಿ ನಮೂದಿಸಿ ಕಳುಹಿಸಲಾಗಿರುತ್ತದೆ.

ವಾಹನದ ಆರೋಪಿಗೆ ಮತ್ತು ನೋಂದಾಯಿತ ಮಾಲೀಕರಿಗೆ ನೀಡಿರುವ ಕಾರಣ ಕೇಳುವ ನೋಟಿಸು ಆರೋಪಿಗೆ ಅಂಚೆ ಮೂಲಕ ಜಾರಿಯಾಗದೇ ಈ ಪ್ರಾಧಿಕಾರಕ್ಕೆ ಹಿಂದೆ ಬಂದಿರುತ್ತದೆ. ವಾಹನದ ಹೆಚ್.ಪಿ.ಎ. ಸಂಸ್ಥೆಗೆ ನೀಡಿದ ನೋಟಿಸು ದಿನಾಂಕ:22.09.2007ರಂದು ಸ್ವೀಕೃತಿಯಾಗಿದ್ದು, ಸ್ವೀಕೃತಿ ರಶೀದಿ ಬಂದಿರುತ್ತದೆ. ಆದರೆ ಯಾವುದೇ ದಾಖಲಾತಿಗಳೊಂದಿಗೆ ವಾಹನ ಬಿಡುಗಡೆಗಾಗಿ ಈ ಪ್ರಾಧಿಕಾರದ ಮುಂದೆ ಯಾರೂ ಖುದ್ದಾಗಿ ಅಥವಾ ವಕೀಲರ ಮೂಲಕ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷಧಾರಗಳೊಂದಿಗೆ ಸಾಬೀತು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:10.11.2006 ರಂದು ಅಶೋಕ್ ಲೈಲಾಂಡ್ ಲಾರಿ ಸಂಖ್ಯೆ:GA-02-V-6655 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಆರೋಪಿಗಳು 2250 ಲೀ. ನಕಲಿ ಮದ್ಯವನ್ನು ಗೋವಾ ರಾಜ್ಯದಿಂದ ಕೇರಳ ರಾಜ್ಯಕ್ಕೆ ಸಾಗಾಣಿಕೆ ಮಾಡುತ್ತಿದ್ದುದನ್ನು ಅಬಕಾರಿ ಉಪ ನಿರೀಕ್ಷಕರು(1), ಜಾರಿ ಮತ್ತು ತನಿಖೆ, ಮಂಗಳೂರು ಉತ್ತರ, ಮಂಗಳೂರುರವರು ಪತ್ತೆಹಚ್ಚಿ ಅಕ್ರಮ ನಕಲಿ ಮದ್ಯ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನಾ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಮದ್ಯವಾಗಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಅಬಕಾರಿ ಉಪ ನಿರೀಕ್ಷಕರು(1), ಜಾರಿ ಮತ್ತು ತನಿಖೆ, ಮಂಗಳೂರು ಉತ್ತರ, ಇವರು ವಶಪಡಿಸಿಕೊಂಡ ಅಶೋಕ್ ಲೈಲಾಂಡ್ ಲಾರಿ ಸಂಖ್ಯೆ:GA-02-V-6655ನ್ನು ವಶಪಡಿಸಿಕೊಂಡು ಸುಮಾರು ಒಂದು ವರ್ಷ ಒಂಭತ್ತು ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ವಾಹನ ಮಾಲೀಕರಿಗೆ ನೀಡಿದ ಕಾರಣಕೇಳಿ ನೋಟಿಸು ಸ್ವೀಕೃತಿಯಾಗಿದ್ದರೂ, ಈ ಪ್ರಾಧಿಕಾರದ ಮುಂದೆ ವಾಹನ ಬಿಡುಗಡೆಗಾಗಿ ಮತ್ತು ವಾಹನವು ಅಕ್ರಮ ಮದ್ಯ ಸಾಗಾಣಿಕೆಯಲ್ಲಿ ತೊಡಗಿಲ್ಲವೆಂದು ಸಾಬೀತುಪಡಿಸಲು ಯಾವುದೇ ಅರ್ಜಿ ಅಥವಾ ವಕೀಲರ ಮುಖಾಂತರ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಮತ್ತು ವಾಹನ ಮಾಲೀಕರು ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಆರೋಪಿಗಳು ಅಕ್ರಮ ನಕಲಿ ಮದ್ಯವನ್ನು ಗೋವಾ ರಾಜ್ಯದಿಂದ ಕೇರಳ ರಾಜ್ಯಕ್ಕೆ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೇ ಮಾರಾಟ ಮಾಡಲೆಂಬ ಉದ್ದೇಶದಿಂದ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಕಂಡುಬರುತ್ತದೆ. ಹಾಗೂ ವಶಪಡಿಸಿಕೊಂಡ ಅಶೋಕ ಲೈಲಾಂಡ್ ಲಾರಿಯನ್ನು 1 ವರ್ಷ 9 ತಿಂಗಳು ಕಳೆದಿದ್ದರೂ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರಕ್ಕೆ ಯಾರೂ ಅರ್ಜಿಯನ್ನು ಸಲ್ಲಿಸದೇ ಇರುವ ಕಾರಣ, ಸದರಿ ವಾಹನವನ್ನು ತೆರೆದಿಟ್ಟ ಬಯಲಿನಲ್ಲಿ ನಿಲ್ಲಿಸಿರುವುದರಿಂದ ಮಳೆ, ಬಿಸಿಲು, ಗಾಳಿಗೆ ಸಿಲುಕಿ ತುಕ್ಕು ಹಿಡಿದು ಹಾಳಾಗುವ ಸಂದರ್ಭವಿದ್ದು, ಇದನ್ನು ಇನ್ನು ಹೆಚ್ಚು ಕಾಲ ಇರಿಸಿಕೊಂಡರೆ ಇನ್ನಷ್ಟು ಶಿಥಿಲಗೊಂಡು ಮೌಲ್ಯಹೀನವಾಗುವ ಸಾಧ್ಯತೆಯಿದ್ದು ಸರ್ಕಾರಕ್ಕೆ ಬರುವ ಆದಾಯ ಕೂಡಾ ಕಡಿಮೆಯಾಗುವ ಸಂಭವವಿರುವುದರಿಂದ ಅಕ್ರಮ ಅಬಕಾರಿ ಸೊತ್ತುಗಳ ಸಾಗಾಣಿಕೆಗೆ ಬಳಸಿದ ಲಾರಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂಬ ಹಿನ್ನಲೆಯಲ್ಲಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು(1), ಜಾರಿ ಮತ್ತು ತನಿಖೆ, ಮಂಗಳೂರು ಉತ್ತರ, ಮಂಗಳೂರು ಇವರ ತಕ್ಷೀರು ನಂಬರ್ 13/2006–07, ದಿನಾಂಕ:10.11.2006ರಲ್ಲಿ ಜಪ್ತು ಪಡಿಸಿರುವ ಅಶೋಕ್ ಲೈಲಾಂಡ್ ಲಾರಿ ಸಂಖ್ಯೆ:GA-02-V-6655ನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:15.07.2008ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರು ಮಹ್ಮದ್ ಹುಸೇನ್**

ಪಿ.ಆರ್.930

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**THE CONSERVATOR OF FORESTS AND APPELLATE AUTHORITY**
**BANGALORE CIRCLE, AT BANGALORE**

**Present:** Dr. U.V. Singh, IFS, Conservator of Forests, and Appellant Authority, Bangalore Circle, Bangalore.

**Dated: this the 11th June 2008**

**APPEAL NO.35/2007**

Sri Shankarappa, Son of Munihanumaiah, Aged about 57 years,
Resident of Gubbalala village, Uttarahalli Hobli, Bangalore
South Taluk. …APPELLANT

AND:

Deputy Conservator of Forests, Bangalore Urban Division
Bangalore
Range Forest Officer, Kaggalipura Range, Kaggalipura, Bangalore ….RESPONDENTS

**APPEAL UNDER SECTION 64A(3) OF KARNATAKA FOREST ACT 1963**

An Appeal has been filed by Sri Shankarappa (Shankar) S/o Munihanumaiah, Resident of Gubbalala Village, Uttarahalli Hobli, Bangalore South against the order Dated:24.01.2007 of Deputy Conservator of Forests, Bangalore Urban Division, Bangalore in FOC No.94/06-07 and 112/06-07 and 8/05-06 of the Kaggalipura Range, Bangalore Urban Division, Bangalore. As per the order Sri Byrappa bin Venkatappa, Sri Suresh bin Late Kaverappa and Sri Shankarappa bin Late Shri Munihanumaiah have to vacate 16 acres 32 gunta forest land in Sy.No.42 of Turahalli Minor Forest in Kaggalipura Forest Range within 30 days of issue of the said order. The Appeal has been filed before this Authority on 29.03.2007.

The Appellant Sri Shankarappa has also filed an application for delay condonation from 24.02.2007 to 29.03.2007. He submits that he has come to know about the order only on 02.03.2007 and taking that as a date of receipt of the order he has filed this appeal within 30 days from this date.

As per the para 40(5) of G.O.No.AFD-181-FAD-69 Dated:13.02.1976 of the Karnataka Forest Manual any person aggrieved by the order of the Deputy Conservator of Forest may within 30 days from the date of the order can appeal against such order to Conservator of Forest having jurisdiction. though there is a delay for about 33 days the same has been condoned on the request of the Appellant to provide fair opportunity to him and dispose off the matter on merits.

The Appellant claims that he is in physical possession and enjoyment of the land in Sy.No.42 measuring 2 acres situated at Turahalli village, Uttarahalli Hobli, Bangalore South Taluk from time

memorial. The appellant did not prescribe the schedule of the encroached land in his appeal which he claims to be in his possession. He further submits that the said land in Sy.No.42 was the Govt. land totally measuring 180 acres 27 guntas of Turahalli village. He claims that the land measuring 2 acres in the said Sy.No.42 was in his father Late Sri Munihanumaiah's possession and he was cultivating. After his death, the Appellant is in continuous possession and enjoyment of the said land. But no genuine records were submitted to support his claim.

The Appellant further claims that the Revenue Department has issued a grant order bearing No.LND.SR.97/68-69 Dated:30.08.1969 in favour of the Appellant and others namely Ramesh Kumar, Nagaraj, Gopamma, Anusuyamma, Gopal, Rajamma and others. He submits that the copy of the said order is produced as Exhibit. But there is no such order annexed by him along with the appeal, written argument and also memo of Examination in chief. On last hearing i.e, today he submits that he is not claiming the land on these records but he has filed an application before the Tahsildar for regularization of encroached land. The copy of the "grant order" has never been produced before this authority by the appellant.

The Appellant further claims that during October 2004 the Respondents attempted to interfere with the possession and enjoyment of land in question by the respondents and in this regard the Appellant has filed Original Suit No.716/2005 before the Court of II Additional Civil Judge (Senior Division) Bangalore Rural District, Bangalore for the relief of permanent injunction and other reliefs. At the time of filing this Appeal the Original Suit was pending before the Hon'ble Civil Court, Senior Division, Bangalore but now it is disposed off as O.S. dismissed.

The Appellant submits that the IInd Respondent has filed a Forest Offence Case (FOC) for encroachment of the land in question out of the Forest land in Sy.No.42, Turahalli Village. Taking the Forest offence case as basis the Ist Respondent without giving any opportunity to him and others passed an order directing the Appellant and others to vacate and hand over the possession of the encroached forest land within 30 days from the order Dated:24.01.2007. He submits that the order issued by Ist Respondent is unsustainable in law and not a speaking order. It is one sided order without applying mind. The documents produced by the Appellant have not been examined by the Ist Respondent and against the principles of natural justice. The order is mechanical and liable to be set aside. Hence, he has filed this Appeal before this authority under Sec.64A (3). All these aspects have been examined during the course of hearing of this appeal.

The order Dated:24.01.2007 of DCF and the connected file have been carefully examined. As per the said order of Deputy Conservator of Forests, Bangalore Urban Division Sri Shankarappa (Shankar) and others have encroached 16 acres 32 guntas of Forest land in Sy.No.42 of Turahalli village of Uttrahalli Hobli which is a Turahalli Minor forest land. The then Maharaja of Mysore vide Notification No.G.1746 FT.65-34-2, Dated:24.08.1934, have constituted 94 acres 8 guntas in Sy.No.41, 159 acres 13 guntas in Sy.No.42 of Turahalli village and 343 acres 38 guntas in Sy.No.5 of Uttarahalli Kaval as Turahalli Minor Forest and defined the boundary of all the sides i.e. North, East, South and West. The encroached land in a part of this Minor Forest falling within the prescribed boundary of the notification Dated:24.08.1934. The description of boundary is very clear without any ambiguity. The Appellant has not challenged this notification as well as the boundary description in the said Appeal. The DCF has passed a comprehensive and speaking order by providing the opportunity to the Appellant as seen from the order Dated:24.01.2007 and the concerned file.

The Deputy Conservator of Forest states in his order that the Range Forest Officer (RFO), Kaggalipura has submitted a detailed enquiry report as an enquiry officer based on the factual records, forest map, notification and boundary description. The RFO has also had a spot inspection of the encroached land of the appellant and others. He states that the Govt. land in Sy.No.42 along with other Sy.Nos. have been notified as Thurahalli Minor Forest and it is also mutated in favour of the Forest Department by the Revenue Department. The DCF states that the appellant has destroy the forest boundary and encroached the forest land for Agriculture purpose. By doing so the Appellant has violated Section 33 and 73(d) of Karnataka Forest Act 1963 and Rule 25 of Karnataka Forest Rules 1969 and Section 2 of the Forest (Conservation) Act 1980 as per the enquiry report submitted by the Range Forest Officer. The encroacher Sri Shankarappa Bin Munihanumaiah has submitted before the DCF that he has filed an application for regularisation of 2.00 acres of land which he is unauthorisedly cultivating since long, in form No.50 in 1991 before the Tahsildar and the same is pending. The appellant submitted that the encroached land has not been granted to him so far. It is noted here that to grant forest land, Tahsildar does not have any jurisdiction and he is not a competent authority.

The DCF states that the written statement filed by Sri Shankarappa and others and the documents submitted by them have been thoroughly examined. He has also examined the enquiry report submitted by the RFO, forest map prepared for encroachment after survey and also the notification Dated:24.08.1934 issued by the then Maharaja of Mysore for constitution of Turahalli Minor Forest.

The DCF states that Sri Shankarappa and others violated the Section 73(d) of the Karnataka Forest Act 1963 by destroying the forest boundary and also violated the Section 33(2) (iii) (iiia) of the Act and Rule 25 (1)(2)(3) and 43 of Karnataka Forest Rules 1969. He also states that by occupying unauthorised forest land for non forestry activity, it is a violation of Section 2 of the Forest (Conservation) Act 1980 and also the order of the Hon'ble supreme Court Dated:12.12.96 in Writ Petition No.202/95 of T. Godavarman.

The Appeal matter has been heard from 11.04.2007 to till date (11.04.2007, 18.04.2007, 25.04.2007, 09.05.2007, 16.05.2007, 13.06.2007, 20.06.2007, 04.07.2007, 24.09.2007 and 30.04.2008, 07.05.2008 and 11.06.2008). The Appellant has filed written arguments dated:09.05.2007 through his Advocate. He has also filed a memo of examination in chief by way of Affidavit on 24.09.2007. There is no document submitted by the Appellant regarding the order of Revenue Department No.LND/SR/97/68-69 Dated:30.08.1969. The appellant admits on 11.06.2008 that the documents submitted by him are not genuine and he is not insisting on these documents for the claim on the encroached forest land instead he has filed an application in Form 50 before the Tahsildar for reqularization of encroached land.

Original copies have never been produced before this authority for any document. The appellant has produced a true copy of mutation registration signed by one Sri D.Dasappa on behalf of Tahsildar dated:08.01.1973. As per the enquiry report dated:27.11.2006 submitted by the Principal Secretary, Revenue Department to Hon'ble Lokayuktha, the document signed by a FDA of the Office of the Tahsildar are fictitious documents and without proper authority. It is noted here that without having any "grant order" of a competent authority for the land in question, the mutation registration cannot be created. Hence the said document is not a genuine document and can't be taken into consideration. It is stated here that the appellant has never produced original copies of the RTC, with excuse stating that the original records are produced before the Civil Court. But on perusal of the judgement in O.S. 716/2005 the Hon'ble Court observed that the plaintiff has not produced the certified copy of the RTC. No.RTC can be created without a grant order of competent authority. On perusal of the order of the Civil Court Senior Division, Bangalore

it is noted that no documents has been produced by the Appellant for the continuous possession of the land. The statements made by him before this authority and before the Civil Court are contradictory to each other.

In his written statement and also in Memo of Examination in Chief as affidavit, the appellant submits that he has filed an O.S.716/2005 in the Court of Senior Division, Bangalore Rural District. Now this O.S. is disposed off by a judgement dated:1st day of December 2007 of the Hon'ble Court of II Addl. Civil Judge (Senior division) Bangalore as dismissed. The copy of the judgement has been obtained and perused carefully. It would be appropriate to refer some of the relevant para of the judgement here as under:

"After going through the contents filed by the Appellant and Respondents the Hon'ble Court (II Addl. Civil Judge) has framed five issues. They are:

1) Whether the plaintiffs prove that they are absolute owners in possession and enjoyment of the suit property?
2) Whether the plaintiffs prove that they became the owners of the property by adverse possession being in possession of the property more than 50 years continuously, openly, to the knowledge of the defendants and perfected their title by adverse possession?
3) Whether the plaintiffs prove that defendants are interfering in the peaceful possession and enjoyment of their property?
4) Whether plaintiffs are entitled for relief sought?
5) What order or decree?

The Hon'ble Court (IInd Addl. Judge Senior Division Bangalore) has examined the issues in detail based on the records produced by the plaintiffs and the respondents and also examined the witnesses of the plaintiffs and defendants and answered the issues with reasons as under:

Issue No: 1 In the Negative

Issue No. 2 In the Negative

Issue No. 3 In the Negative

Issue No. 4 In the Negative

Issue No. 5 As per final order

The order issued is "Suit of plaintiffs dismissed as per vide judgement".

It is stated here that the appeal, written argument and the Memo for examination in chief as affidavit, filed by the Appellant wherein he submits that he has enclosed the grant certificate Dated:13.08.1968 has been carefully perused and found that the appellant has not submitted "grant certificate" as exhibit. The appellant admits the same on 11.06.2008. On examination, a zerox copy of mutation extract (signed by D.Dasappa on behalf of Tahsildar) has only been produced by the appellant for 2.00 Acres. It is further stated here that the said entry of mutation has been cancelled as per MR No.1/97-98 by the Deputy Tahsildar, Uttarahalli hobli as stated in the judgement Dated:01.12.2007 of the Trial Court. Further as per the judgement, the said mutation has not been challenged by the plaintiff and entry in the name of Forest Department continued as owner. The appellant has never produced original grant certificate or grant order or RTC in the entire course of hearing and also with appeal, written statement, Memo for examination in chief and on any other day of hearing. In the absence of necessary records it is not proper to hold that he is in possession of the property for more than statutory period. Under these circumstances it is not proper to say that the appellant or his ancestors continued in

possession and enjoyment of the said scheduled property as also ordered by the Hon'ble II Additional Civil Judge (Senior Division) Bangalore Rural District, Bangalore.

It is pertinent to mention here that the land in question of the appellant falls within the notified prescribed boundary of the Thurahalli Minor Forest. The boundary of North and East side of the Minor Forest has been meticulously described in the notification. There is no dispute whatsoever on this boundary description hence encroached land falls with in the notified boundary is a part of Minor Forest.

The appellant has not produced any grant certificate or any order in this behalf as claimed by him. The bonafides of the records produced by the appellant as RTCs etc, are not genuine on want of the grant certificate and cannot be taken for any consideration. It is further stated here that as per one of exhibit (true copy) produced by the appellant for applying as bagar hukum saguvali darkasthu application before the Tahsildar, Bangalore South, Dated:15.04.1991 for grant of 2.00 acres land in Sy.No.42 of Thurahalli village Uttarahalli Hobli is contrary to the claims of appellant that his father has been granted the same land by an order Dated:30.08.1969 by Revenue Department. If the said land has been already granted to his father long back as per his claims then what was the necessity to file an application for grant of same encroached land to an extent of 2.00 acres before Tahsildar in 1991 for which he claim that he is cultivating since many years. Filing an application for regularization of encroached land itself is an evidence that appellant is a unauthorized occupant of forest land. It is further observed that the RTC produced by the appellant from 1968-69 to 1971-72 the Katha Nos is written as No.38 while in the subsequent RTCs the Kathe No.is 43. There is no justification given by the appellant for such change.

It is relevant to note here that Land Grant Committee does not have any Authority and jurisdiction over the forest land. The Committee is constituted for grant of Revenue land (non forest Govt. land) and not for the grant of forest land. In the present appeal the encroached land is forest land as clearly recorded in all the records and proved beyond doubt. Hence the claims of the appellant regarding filing application under the Revenue Act before the Tahsildar for regularization of encroached land is not considered and deserve to be rejected.

The appellant has never described his schedule property in the Appeal. But as per judgement of Hon'ble IInd Addl. Civil judge Bangalore the schedule property, has been indicated in schedule-F as under:

**East by :** Karishma Forum and 40 feet's Road.

**West by:** Kavalu gutta

**North by :** Gopal's property

**South by:** Rajammas's property

For this said schedule property the IInd Addl. Civil Judge, Bangalore Court has rejected the title of ownership by issuing judgement in O.S. No.716/2005 Dated:01.12.2007 and no relief of any kind is granted. Further the said schedule property is a part of the notified Turahalli Minor Forest.

By going through all the records produced and circumstances before this authority, it is confirmed beyond doubt that the land in Sy.No.42 of Thurahalli village as per boundary description of the notification Dated:24.08.1934 (the notification No.G.1746-Ft.65-34-2 Dated 24$^{th}$ August 1934) is Thurahalli Minor Forest. The notification has been issued by the Govt. of His Highness the Maharaja of Mysore under the provisions of the Section 35 of the Mysore Forest Regulations (XI of 1900). This Minor forest land has never been denotified under the provisions of Mysore Forest Regulations 1900 and also of Karnataka Forest Act and Rules till date. The Revenue records are also mutated in favour of the Forest Department. Hence the claim of the appellant is unfounded and cannot be admitted. It is relevant to quote the order of

the Hon'ble Supreme Court of India (AIR 1997 Supreme Court 122A and AIR 1997 Supreme Court 1233) wherein it has been made clear that "the orders issued in the matter of forest land shall be read, modified wherever necessary and this order (order Dated:12.12.1996) will operate and be complied with by all concerned, not withstanding any order at variance, made or which may be made hereafter by any authority including the Central or any State Govt. or any Court including High Court or Tribunal.

It is also relevant to mention herein the part of the order of the Hon'ble High Court in WP No.16395/2000, Dated:22.01.2001.

"Admittedly in the case on hand the lands in question were not de-reserved or denotified before being granted to the petitioner. It is nobody's case that the Central Government has not granted permission. Therefore this grant is contrary to Section 2 of the Forest (Conservation) Act. In fact that the Tribunal in the impugned order notices that the thick forest would get deforested is such acts are permitted".

"The petitioner was granted the forest land contrary to the legal provisions. Unless the Courts come down very heavily on these types of transactions of regularization of Forest lands the forest wealth would be depleted to the minimum level which is not in the interest of anybody. Forest lands are very precious for maintaining environment and ecology. Valuable forest land is being gifted away to the petitioner much against the provisions with the support of forest officials and the revenue authorities. The tribunal has noticed that the Range Forest Officer and the Tahsildar in convince with the petitioner have created these documents. Therefore I deem it proper to direct the Secretary, Forest Department to hold a through enquiry into the matter to find out as to who is the real culprit and under what circumstances the forest officials have obliged the petitioner in providing no objection resulting in this situation and action may be taken against those responsible for this. On the facts and circumstances of the case I deem it proper to grant a cost of Rs.5000/- payable by the petitioner to the respondents. Writ Petition is dismissed with a cost of Rs.5000/- payable by the petitioner to the respondents within four weeks from today".

It is further submitted that the Hon'ble High Court of Karnataka in its order dated:09.08.2007 in Writ Petition: 14151 of 2005 (GM-FOR) between Sri Chandha Ganiga V/s the Conservator of Forests and appellant authority, Mangalore Division has held that the part of the Forest land could not be granted to the Petitioner by way of regularization without authorities and jurisdiction. In the present case even if it is considered that the records submitted by the appellant is having any relevance in the matter, the grant in forest land without denotification of the forest land and without authority and jurisdiction of Revenue Department, do not find place in the statutory provisions of the Forest Laws.

It is pertinent to put on record the description of boundary of the Thurahalli Minor Forest towards the area where the appellant has encroached the forest land.

**North:** Starting from the North-East corner of Sy.No.40 of Turahalli, the line runs east and north-east along the southern boundary of Sy.No.37 and 36 of Thurahalli to the south-east corner of latter survey number; then north-east along its eastern boundary to its north-east corner; then south-east along the southern boundary of Sy.No:33 and 25 of Turahalli to the south-east corner of Sy.No.25: then east through Sy.No:42 to the junction gadi bandh of Sy.No:47 and 48 of Turahalli village.

**East:** Then south along the western boundary of Sy.No:48 of Turahalli to its south-west corner; then east along its boundary to its south-east corner; then east along the southern boundary of Gublal for about 2 chains to the north-east corner of Sy.No:4 of Uttarahalli-Manavarthekaval; then south along its western boundary to its south-east corner; then south, west south, west, north-west and south-east along

